ವೀರಶೈವ ವಿದ್ಯಾಲಯ ಗ್ರಂಥಮಾಲೆಯು

॥ಓಂ॥

# ಅಕ್ಕನ ಉಪದೇಶ.




ಲೇಖಕರು-

ಶ್ರೀ. ಹರ್ಡೇಕರ ಮಂಜಪ್ಪನವರು.



ಕ್ರಿ. ಶ. ೧೯೩೭. ] ಕ್ರಯ ೧ ಆಣೆ. [ ಶಾ. ಶ. ೧೮೫೯.

# ಪೀಠಿಕೆ.

ಹೆಣ್ಣುಮಕ್ಕಳಿಗೆ ನಮ್ಮ ದೇಶದ ಹಿಂದಣ ಪ್ರಸಿದ್ಧ ಸ್ತ್ರೀಯರ ಚರಿತ್ರೆಯು ಚಿಕ್ಕಂದಿನಲ್ಲಿಯೇ ಗೊತ್ತಿರುವುದು ಒಳ್ಳೆಯದು. ಆದುದರಿಂದ ಅಕ್ಕ ಮಹಾದೇವಿಯ ಸಂಗತಿಗಳನ್ನೂ ಆ ಮಹಾತ್ಮಳು ಮಾಡಿದ ಉಪದೇಶಗಳನ್ನೂ ಸುಲಭವಾದ ಭಾಷೆಯಲ್ಲಿ ಬರೆದು ಅಕ್ಕನ ಹುಣ್ಣಿಮೆ (ಚೈತ್ರ ಶುದ್ಧ ಹುಣ್ಣಿಮೆ) ಕಾಣಿಕೆಯಾಗಿ ಇದನ್ನು ಪ್ರಕಟಿಸಿದ್ದಾಗಿದೆ.

ನಮ್ಮ ನಾಡಿನ ತಾಯಿಯರಾದ ಎಲ್ಲ ಹೆಣ್ಣುಮಕ್ಕಳ ಕೈಯಲ್ಲಿಯೂ ಇದನ್ನು ಕೊಟ್ಟು ಅವರು ಹೆಚ್ಚು ಪರಿಶುದ್ಧರೂ ವೀರರೂ ಆಗುವಂತೆ ಮಾಡಬೇಕಾಗಿ ಪ್ರಾರ್ಥನೆ.

ಆಲಮಟ್ಟಿ.
ತಾ. ೨೫-೪-೧೯೩೭

ಹರ್ಡೇಕರ ಮಂಜಪ್ಪ.

||ಓಂ||

# ಅಕ್ಕ ಮಹದೇವಿಯ ಕಥೆ.



ತಂಗಿ, ನಿನಗೆ ಒಬ್ಬ ಅಕ್ಕನ ಕಥೆಯನ್ನು ಹೇಳುತ್ತೇನೆ. ಅತ್ತಿತ್ತ ನೋಡದೆ ಮನಸು ಗೊಟ್ಟು ಕೇಳು,

ಈಗ, ೮೦೦ ವರುಷಗಳ ಹಿಂದೆ ಮೈಸೂರು ಕರ್ನಾಟಕದಲ್ಲಿ ಉಡುತಡಿ ಎಂಬ ಪಟ್ಟಣವಿದ್ದಿತು. ಅಲ್ಲಿ ಕೌಶಿಕನೆಂಬ ಒಬ್ಬ ರಾಜನು ರಾಜ್ಯವಾಳುತ್ತಿದ್ದನು. ಆಗ ಆ ಪಟ್ಟಣದಲ್ಲಿ ನಿರ್ಮಲ ಎಂಬ ಒಬ್ಬ ಶಿವಭಕ್ತನಿದ್ದನು. ಆತನಿಗೆ ಸುಮತಿ ಎಂಬ ಒಬ್ಬ ಒಳ್ಳೆಯ ಹೆಂಡತಿ

ಯಿದ್ದಳು. ಇವರಿಬ್ಬರು ಸುಖದಿಂದಿರುವಾಗ ಒಂದು ದಿನ ಸುಮತಿಯು ಒಂದು ಹೆಣ್ಣು ಕೂಸನ್ನು ಹೆತ್ತಳು. ಆ ಕೂಸು ಬಹು ಮುದ್ದಾಗಿದ್ದಿತು. ಅದಕ್ಕೆ ಮಹದೇವಿ ಎಂಬ ಹೆಸರಿಟ್ಟರು.

ಮಹದೇವಿಯು ಬಹು ಜಾಣಳಾಗಿದ್ದಳು. ಚಿಕ್ಕಂದಿನಲ್ಲಿಯೇ ವಿದ್ಯೆ ಬುದ್ಧಿಗಳನ್ನು ಕಲಿತಳು. ದೊಡ್ಡವಳಾಗುತ್ತ ಬಂದ ಹಾಗೆ ಮನೆಗೆಲಸಗಳಲ್ಲಿ ತನ್ನ ತಾಯಿಗೆ ಬಹು ಸಹಾಯ ಮಾಡುತ್ತಿದ್ದಳು. ಬೆಳಿಗ್ಗೆ ಬಹು ನಸುಕಿನಲ್ಲೆದ್ದು ಕೈಕಾಲು ಮೋರೆಗಳನ್ನು ತೊಳೆದುಕೊಂಡು ವಿಭೂತಿಯನ್ನು ಧರಿಸಿಕೊಂಡು ಶಿವಭಜನೆಯನ್ನು ಮಾಡುತ್ತಿದ್ದಳು. ಆಮೇಲೆ ಮನೆಯ ಕಸಕಡ್ಡಿಗಳನ್ನು ತೆಗೆದು ಮನೆಯ

ಮುಂದೆಯೂ ಶಿವಪೂಜೆಯ ಕೋಣೆಯಲ್ಲಿಯೂ ಸಾರಿಸಿ ರಂಗವಲ್ಲಿಯನ್ನು ಹಾಕಿ ತಾಯಿಯು ಹೇಳಿದ ಕೆಲಸಗಳನ್ನು ಮಾಡುತ್ತಿದ್ದಳು.

ತನ್ನ ಮನೆಗೆಲಸ ಮುಗಿದ ಬಳಿಕ ಓದು ವುದು ಮತ್ತು ಬರೆಯುವುದು ಇವೇ ಅವಳ ಕೆಲಸಗಳಾಗಿದ್ದವು. ಲಿಂಗಪೂಜೆಯಲ್ಲಿ ಬಹು ಪ್ರೀತಿಯಿದ್ದಿತು. ಲಿಂಗಪೂಜೆಗೆ ಹೂವು, ಪತ್ರೆ, ಗಂಧಾಕ್ಷತೆಗಳನ್ನು ತಂದುಕೊಡುವುದರಲ್ಲಿ ಮಹದೇವಿಗೆ ಬಹು ಪ್ರೇಮ. ತಂಗಿ, ಮಹ ದೇವಿಗೆ ಝಳ ಝಳವಾಗಿರುವುದು ಬಹು ಸೇರುತ್ತಿತ್ತು. ಸೀರೆ ಕುಪ್ಪಸಗಳನ್ನೂ ಅಡಿ ಗೆಯ ಪಾತ್ರೆಗಳನ್ನೂ ಬಹು ಝಳ ಝಳ ವಾಗಿಡುತ್ತಿದ್ದಳು. ಅಲ್ಲಲ್ಲಿ ಕಸಕಡ್ಡಿ ಬಿದ್ದಿದ್ದರೆ ಅವಳಿಗೆ ಸೇರುತ್ತಿರಲಿಲ್ಲ. ಕಂಡ ಕಂಡ ಹೆಣ್ಣು

ಮಕ್ಕಳ ಸಂಗಡ ಮಾತನಾಡುವುದಾಗಲಿ, ಮನೆ ಮನೆಗೆ ತಿರುಗಾಡುವುದಾಗಲಿ, ಮಹದೇವಿಗೆ ಗೊತ್ತೇ ಇರಲಿಲ್ಲ. ಉಡಿಗೆ ತೊಡಿಗೆಗಳಿಗಾಗಲಿ, ಊಟ ಉಪಚಾರಗಳಿಗಾಗಲಿ, ತನಗೆ ಇಂಥಾದ್ದೇ ಬೇಕೆಂದು ಎಂದೂ ಹಟಮಾಡಿದವಳಲ್ಲ; ಬಾಯಿಬಿಚ್ಚಿ ಕೇಳಿದವಳಲ್ಲ.

ಮಹದೇವಿಯು ಈ ನಡೆನುಡಿಗಳನ್ನು ನೆರೆಹೊರೆಯವರು ನೋಡಿ ಬಹು ಸಂತೋಷಪಟ್ಟು ಅವಳನ್ನು ಕೊಂಡಾಡುತ್ತಿದ್ದರು. ತಮ್ಮ ಮನೆಯಲ್ಲಿರುವ ಹೆಣ್ಣುಮಕ್ಕಳಿಗೆ "ಮಹದೇವಿಯನ್ನು ನೋಡಿ ನಾಚಿಕೆ ಬರುವುದಿಲ್ಲವೆ ? ಅವಳಿಂದ ಸ್ವಲ್ಪಾದರೂ ಕಲಿಯಿರಿ." ಎಂದು ಹೇಳುತ್ತಿದ್ದರು. ಇವಳ ತಾಯಿಯನ್ನು ಕಂಡಾಗ ಅವ್ವಾ, ನಿಮ್ಮ ಮಗಳು ನಿಜವಾ

ಗಿಯೂ ಮಹಾದೇವಿಯು. ಪಾರ್ವತಿಯೇ ನಿಮ್ಮ ಹೊಟ್ಟೆಯಲ್ಲಿ ಹುಟ್ಟಿ ಬಂದಿದ್ದಾಳೆ. ನೀನೇ ಪುಣ್ಯವಂತಳವ್ವಾ. ಎಂದು ಮಹದೇವಿಯನ್ನೂ ಅವಳ ತಾಯಿ ತಂದೆಗಳನ್ನೂ ನೆರೆಹೊರೆಯ ವರು ಹೊಗಳುತ್ತಿದ್ದರು.

ತಂಗಿ, ಒಳ್ಳೆಯವರನ್ನು ಹೊಗಳುವುದೂ ಕೆಟ್ಟವರನ್ನು ಅಲ್ಲಗಳೆಯುವದೂ ಸರಿಯೇ ಸರಿ. ಒಳ್ಳೆಯ ಹೆಣ್ಣುಮಕ್ಕಳು ತಮಗೂ ತಮ್ಮ ತಾಯಿ ತಂದೆಗಳಿಗೂ ಒಳ್ಳೆಯ ಹೆಸರು ಬರು ವಂತೆಯೇ ನಡೆಯುತ್ತಾರೆ. ಕೆಟ್ಟ ಹೆಣ್ಣುಮ ಕ್ಕಳಿಂದಾದರೋ, ಅವರಿಗೂ ಅವರ ತಾಯಿ ತಂದೆಗಳಿಗೂ ಕೆಟ್ಟ ಹೆಸರು ಬರುವುದಲ್ಲದೆ ಕೇಡೂ ಆಗುತ್ತದೆ. ಆದುದರಿಂದ ತಂಗಿ,

ನೀನು ಇದನ್ನು ನೆನಪಿನಲ್ಲಿಟ್ಟುಕೊಂಡೇ ನಡೆ ಯುಬೇಕವ್ವ.

ಆ ಉಡುತಡಿಯ ಕೌಶಿಕ ರಾಜನು ಬಹು ಕೆಟ್ಟವನಾಗಿದ್ದನು. ಆತನು ಒಂದು ದಿನ ಮೆರ ವಣಿಗೆಯಿಂದ ಹೋಗುತ್ತಿರುವಾಗ, ಮಹದೇ ವಿಯು ತನ್ನ ಮನೆಯಲ್ಲಿ ಬಾಗಿಲ ಮರೆಗೆ ನಿಂತು ನೋಡುತ್ತಿದ್ದುದನ್ನು ಕಂಡನು. ಮಹ ದೇವಿಯು ಬಹು ಚಲುವೆಯಾಗಿದ್ದಳು. ಆದು ದರಿಂದ ಇವಳನ್ನು ಲಗ್ನವಾಗಬೇಕೆಂದು ರಾ ಜನು ಯೋಚಿಸಿ ಇವಳ ತಾಯಿ ತಂದೆಗಳಿಗೆ ಹೇಳಿ ಕಳುಹಿಸಿದನು. ಒಳ್ಳೆಯ ಹೆಣ್ಣುಮ ಕ್ಕಳಿಗೆ ಒಳ್ಳೆಯ ರೂಪವು ಒಂದು ಕುತ್ತೇ ಸರಿ. ಏಕೆಂದರೆ, ಕೆಟ್ಟ ಜನರೇ ಲೋಕದಲ್ಲಿ ಹೆಚ್ಚು. ಬಂಗಾರವನ್ನು ಕಾಸಿ ಬಡಿದನಂತರ ಅದರ

ಹೊಳಪು ಹೆಚ್ಚುವುದಿಲ್ಲವೇ ? ಹಾಗೆಯೇ ಒಳ್ಳೆಯ ಹೆಣ್ಣುಮಕ್ಕಳಿಗೆ ಕೆಟ್ಟವರಿಂದ ಕಷ್ಟ ಬಂದರೂ ಅದರಿಂದ ಪಾರಾಗಿ ಅವರು ಹೆಚ್ಚಿನವರೇ ಆಗುತ್ತಾರೆ.

ಮಹದೇವಿಯ ಮನೆಗೆ ರಾಜದೂತರು ಬಂದು ಅವಳ ತಾಯಿತಂದೆಗಳಿಗೆ ನಿಮ್ಮ ಮಗಳನ್ನು ನಮ್ಮ ರಾಜನಿಗೆ ಕೊಡಿರೆಂದು ಕೇಳಿದರು. ಇದನ್ನು ಕೇಳಿದ ಕೂಡಲೇ ಆ ತಾಯಿತಂದೆಗಳ ಪ್ರಾಣವೇ ಹೋದಂತಾಯಿತು. ರಾಜನು ಬೇರೆ ಕುಲದವನು. ಮಹದೇವಿಯನ್ನು ಕೊಡಲಿಕ್ಕಾಗುವುದೇ ? ಅವಳು ಒಪ್ಪುವಳೇ ? ಎಂದು ಚಿಂತಿಸಿದರು. ಆಗ ರಾಜದೂತರು " ಏಕೆ ಚಿಂತೆ ಮಾಡುತ್ತೀರಿ ? ನಿಮ್ಮ ಮಗಳನ್ನು ಕೊಟ್ಟರೆ ನಿಮ್ಮ ಬಡತನವೇ ಬಯಲಾಗುತ್ತದೆ.

ರಾಜ್ಯವೇ ನಿಮ್ಮದಾಗುತ್ತದೆ. ಬೇಕಾದುದನ್ನು ಉಂಡುಟ್ಟು ಸುಖಪಡುತ್ತಾಳೆ. ನೀವು ಪ್ರೀತಿಯಿಂದ ಕೊಡದಿದ್ದರೆ ರಾಜನು ಒತ್ತಾಯದಿಂದ ಕರೆದುಕೊಂಡು ಹೋಗುತ್ತಾನೆ. ಆಗ ನೀವೇನು ಮಾಡುವಿರಿ?'' ಎಂದು ಹೇಳಿದರು.

ನಿರ್ಮಲ ಸುಮತಿಯವರೇನು ಕೆಟ್ಟವರೇ? ದಡ್ಡರೇ? ಅನೇಕರು ತಮ್ಮ ಮಗಳನ್ನು ಹಣದಾಸೆಗೆ ಕುರುಡನಿಗಾಗಲಿ, ಕುಂಟನಿಗಾಗಲಿ, ಗುಣಹೀನನಿಗಾಗಲಿ, ಯಾರಿಗಾದರೇನು? ಹಣ ಹೆಚ್ಚು ಕೊಟ್ಟವರಿಗೆ ಕೊಟ್ಟು ದನಕರುಗಳನ್ನು ಮಾರಿಕೊಳ್ಳುವವರಂತೆ ಮಗಳನ್ನು ಮಾರಿಕೊಳ್ಳುವವರೇ? ಮಗಳು ಗಂಡನ ಮನೆಯಲ್ಲಿ ಕಷ್ಟದಿಂದ ಕಣ್ಣೀರುದುರಿಸಿದರೆ ನಾವು ನರಕಕ್ಕೆ ಗುರಿಯಾಗುತ್ತೇವೆಂಬುದು ಮಹದೇವಿಯ

ತಾಯಿ ತಂದೆಗಳಿಗೆ ಗೊತ್ತಿದ್ದಿತು. ಆದುದರಿಂದ ಹಣದಾಸೆಗೆ ಮಗಳನ್ನು ಕೊಡಲು ಒಪ್ಪಲಿಲ್ಲ. ಮಹದೇವಿಯೇನು ಸಣ್ಣವಳಲ್ಲ. ದಡ್ಡಳೂ ಅಲ್ಲ. ಅವಳನ್ನು ಕೇಳೋಣವೆಂದು ತಾಯಿ ತಂದೆಗಳು ಮಗಳಲ್ಲಿ ಎಲ್ಲ ಸಂಗತಿಗಳನ್ನು ಹೇಳಿದರು.

ತಂಗೀ, ಮೀನಿಗೆ ಈಜುವುದನ್ನು ಯಾರಾದರೂ ಕಲಿಸುತ್ತಾರೆಯೇ ? ಕೋಗಿಲಿಗೆ ಸ್ವರವನ್ನು ಕಲಿಸಿದವರಾರು ? ಅವು ಹುಟ್ಟುವಾಗಲೇ ಶಿವನು ಆಯಾಯ ಗುಣಗಳನ್ನು ಅವುಗಳಿಗೆ ಕಲಿಸಿಯೇ ಕಳುಹಿಸುತ್ತಾನೆ. ಹಾಗೆಯೇ ಮಹದೇವಿಗೆ ಜಾಣತನವು ಹುಟ್ಟುಗುಣವು. ಅವಳಿಗೆ ಯಾರು ಏನು ಕಲಿಸಬೇಕಾಗಿದೆ ? ರಾಜದೂತರನ್ನು ಕರೆದು ರಾ

ಜನು ನಾನು ಹೇಳಿದಂತೆ ಕೇಳುತ್ತೇನೆಂದು ಮಾತುಕೊಟ್ಟರೆ ನಾನು ಲಗ್ನವಾಗುತ್ತೇನೆಂದು ತಿಳಿಸಿರಿ ಎಂದು ಹೇಳಿಕಳುಹಿಸಿದಳು. ಇದನ್ನು ತಾಯಿ ತಂದೆಗಳು ಕೇಳಿ ಬಹು ಬೆರಗಾದರು.

ರಾಜ ದೂತರು ನಡೆದ ಸಂಗತಿಗಳನ್ನೆಲ್ಲ ರಾಜನಿಗೆ ತಿಳಿಸಲು ರಾಜನು ಬಹು ಸಂತೋಷದಿಂದ ಮಹದೇವಿಯ ಮನೆಗೇನೇ ಬಂದನು. ಆತನಿಗೆ ಅವಳನ್ನು ಲಗ್ನವಾಗಬೇಕೆಂಬ ಹುಚ್ಚು ತಲೆಗೇರಿತ್ತು. ಇಂಥ ಹುಚ್ಚುಹತ್ತಿದವರಿಗೆ ಹಿಂದೆಮುಂದಿನ ಯೋಚನೆಗಳು ಇರುತ್ತವೆಯೋ ? ಇಲ್ಲವೇ ಇಲ್ಲ. ಮಹದೇವಿ, ಅರಮನೆಗೆ ಹೋಗೋಣ ನಡೆ. ನೀನು ಕೇಳಿದ್ದನ್ನು ಕೊಡುತ್ತೇನೆ. ನೀನು ಹೇ

ಳಿದಂತೆ ನಡೆಯುತ್ತೇನೆ. ಇಗೋ, ಈ ಮಾತಿಗೆ ತಪ್ಪಿದರೆ ತಾಯಿ ಮಕ್ಕಳನ್ನು ಅಗಲಿಸಿದಂಥ ಪಾಪ ನನಗೆ ಬರಲಿ. ಆಕಳನ್ನು ಕೊಂದಂಥ ಪಾಪ ಬರಲಿ. ಮಾತಿಗೆ ತಪ್ಪುವುದಿಲ್ಲ. ಏಳು. ಬೇಗನೇ ಅರಮನೆಗೆ ಹೋಗೋಣ. ಎಂದು ರಾಜನು ಹುಚ್ಚುಹಿಡಿದವರಂತೆ ಹಲುಬಹತ್ತಿದನು.

ಮಹದೇವಿಯು ರಾಜನ ಮಾತುಗಳನ್ನು ಕೇಳಿ ಇಗೋ, ರಾಜನೇ ಕೊಟ್ಟಮಾತಿಗೆ ತಪ್ಪಬಹುದು. ವಿಚಾರಮಾಡು. ನಾನು ಹೇಳಿದಂತೆ ನಡೆಯುವಿಯಾ ? ನಿಜವೇ ? ಹಾಗಾದರೆ ಬರುತ್ತೇನೆ. ಎಂದು ಮಹದೇವಿಯು ಹೇಳಿದನಂತರ ಅವಳಿಗಾಗಿಯೇ ತಂದ ಪಲ್ಲಕ್ಕಿ

ಯಲ್ಲಿ ಕುಳಿತು ಮಹದೇವಿಯು, ಕೌಶಿಕ ರಾಜನ ಅರಮನೆಗೆ ಹೋದಳು.

ರಾಜನು ಮಹದೇವಿಯ ಮಾತನ್ನು ಕೇಳಬೇಕೆಂದು ಬಹು ಹಂಬಲಿಸಿ, ಕೇಳಿದ ಕೂಡಲೇ ''ನೀನು ವೀರಶೈವನಲ್ಲ; ಭವಿಯು. ಆದುದರಿಂದ ನೀನು ಲಿಂಗಧಾರಣ ಮಾಡಿಕೊಂಡು ವೀರಶೈವನಾದರೆ ಮಾತ್ರ ನಿನ್ನನ್ನು ಲಗ್ನವಾಗುತ್ತೇನೆ. ಎಂದು ಮಹದೇವಿಯು ಬಹು ದಿಟ್ಟತನದಿಂದ ಹೇಳಿದಳು. ಈ ಮಾತುಗಳನ್ನು ಕೇಳಿದ ಕೂಡಲೆ ರಾಜನ ಎದೆಗೆ ಗುಂಡು ಹೊಡೆದಂತಾಯಿತು. ಅಯ್ಯೋ! ಇನ್ನೇನುಮಾಡಲಿ? ನಾನು ಇವಳಿಗಾಗಿ ನನ್ನ ಮತವನ್ನೂ ಬಂಧು ಬಳಗದವರನ್ನೂ ಬಿಡಬಹುದೇ? ಜನರೇನು ಆಡಿಕೊಳ್ಳಬಹುದು?

ಇವಳನ್ನಾದರೂ ಲಗ್ನವಾಗದೆ ಹೇಗೆ ಬಿಡಲಿ? ಎಂದು ಚಿಂತಿಸಿ ಮಹದೇವಿಯ ಮೈಮೇಲೆ ಕೈಹಾಕ ಹೋದನು.

ಆಗ ಮಹದೇವಿಯು ''ರಾಜನೇ ಇದು ನಿನಗೆ ಸರಿಯಲ್ಲ. ಕೊಟ್ಟ ಮಾತನ್ನು ನೆನಪು ಮಾಡಿಕೊ. ನಾನೊಬ್ಬಳೇ ಇಲ್ಲಿದ್ದೇನೆಂದು ನೀನು ಹೀಗೆ ಮಾಡಬೇಡ. ಇಲ್ಲಿ ಶಿವನೂ ಇದ್ದಾನೆ. ನನ್ನ ಮೈ ಮುಟ್ಟಿದರೆ ಸುಟ್ಟುಹೋಗುವಿ.'' ಎಂದು ಬಹು ಸಿಟ್ಟಿನಿಂದ ಹೇಳಿದಳು. ಆದರೂ ರಾಜನಿಗೆ ಬುದ್ಧಿಬರಲಿಲ್ಲ. ಮಹದೇವಿಯನ್ನು ಮುಟ್ಟಹೋದನು.

ಆಗ ಮಹದೇವಿಯು ಶಿವ ಶಿವಾ! ನನಗೆ ಇಂತಹ ಹೊತ್ತು ತಂದಿಯಾ! ನೀನೇ ನನಗೆ ಗತಿ. ಎಂದು ಶಿವನ ನೆನಿಸಿ ಅಯ್ಯೋ!

ಈ ನನ್ನ ಹಾಳಾದ ರೂಪಕ್ಕಾಗಿಯೋ ನೀನು
ನನ್ನನ್ನು ಲಗ್ನವಾಗಬೇಕೆನ್ನುವಿಯಾ ? ಛಿ !
ಮೂಢ. ಎಲುವು, ರಕ್ತಗಳಿಂದ ಕೂಡಿದ ಈ
ಮಾಂಸದ ಮುದ್ದಿಗೆ ಮರುಳಾಗಿರುವಿಯಾ ?
ಎಂದು ಹೇಳಿ ತಾನುಟ್ಟ ಸೀರೆಯನ್ನೂ ತೊ
ಟ್ಟ ಕುಪ್ಪಸವನ್ನೂ ತೆಗೆದುಹಾಕಿ ಬತ್ತಲೆಯಾ
ದಳು !

ತಂಗಿ, ದೇಹದ ಮೇಲೆ ಅಭಿಮಾನವಿ
ಲ್ಲದೆ ಇಂಥ ವೈರಾಗ್ಯವನ್ನು ಈ ವರೆಗೆ ಜಗ
ತ್ತಿನಲ್ಲಿ ಯಾವ ಹೆಣ್ಣು ಮಗಳೂ ತೋರಿಸಿ
ಲ್ಲವ್ವಾ! ಈ ನಮ್ಮ ಮಹದೇವಿಯಕ್ಕನು ಎಂ
ಥ ಗಟ್ಟಿಗಳಿರಬಹುದು ? ಇವಳು ಮಾಡಿದ
ಮಾಟವನ್ನು ನೋಡಿ ರಾಜನು ಬೆರಗಾದನು
ಇವಳನ್ನು ಲಗ್ನವಾಗಬೇಕೆಂದಿದ್ದ ಹುಚ್ಚು ಇ

ಳಿಯಿತು. ಇವಳು ತನ್ನ ಮನೆಯನ್ನು ಬಿಟ್ಟುಹೋದರೆ ಸಾಕು. ಇನ್ನೆಲ್ಲಿ ನನಗೆ ಯಾವ ಅಪವಾದ ಕೇಡುಗಳು ಬರುವವೋ ಎಂದು ರಾಜನು ಚಿಂತಿಸಿ ಅಕ್ಕನನ್ನು ಬಿಟ್ಟುಬಿಟ್ಟನು.

ಅಕ್ಕನು ಅರಮನೆಯಿಂದ ಹಾಗೆಯೇ ಹೊರಟಳು. ತಾಯಿ ತಂದೆಗಳು ಬಹಳವಾಗಿ ಕರೆದರು. ಅವ್ವಾ, ನೀನು ಹೀಗಿರಬೇಡ. ನಿನ್ನ ಮನಸ್ಸಿಗೆ ಬಂದಹಾಗೆಯೇ ಲಗ್ನಮಾಡಿ ಕೊಡುತ್ತೇವೆ. ಬಾ. ತಂಗಿ, ಮನೆಗೆ ಬಾ. ಎಂದು ನೆಂಟರಿಷ್ಟರೂ ನೆರೆಹೊರೆಯವರೂ ಪರಿಪರಿಯಿಂದ ಕರೆದರು. ಅಕ್ಕನು ಬಂಧು ಬಳಗದವರ ಮಾತನ್ನು ಕೇಳಲಿಲ್ಲ. ಈ ದೇಹವು ಶಿವನದು. ಶಿವನೇ ನನಗೆ ಗಂಡನು. ಮಳ್ಳುಗಳಿರಾ; ಮತ್ತೆ ನನ್ನ ಮದುವೆಯನ್ನು

ಮಾಡುವಿರಾ ? ಎಂದು ಹೇಳಿ ಅಕ್ಕನು ಅಡ ವಿಗೆ ಹೊರಟು ಹೋದಳು.

ಅಯ್ಯೋ! ಮಹದೇವಿ ಹೋದಿಯಾ ? ನಮ್ಮ ಕೈ ಬಿಟ್ಟಿಯಾ! ಎಂದು ತಾಯಿ ತಂದೆ ಗಳು ಬಹು ಮರುಗಿದರು. ಇದನ್ನು ನೆರೆ ಹೊರೆಯವರು ನೋಡಿ ''ಏಕೆ ಚಿಂತಿಸುವಿರಿ? ಅವಳೇನು ನಿಮ್ಮ ಮಗಳೆ ? ನೀವು ಏನೋ ಪುಣ್ಯಮಾಡಿದ್ದಿರಿ; ಅದಕ್ಕಾಗಿಯೋ ಆ ಪಾರ್ವ ತಿಯು ನಿಮ್ಮ ಹೊಟ್ಟೆಯಲ್ಲಿ ಹುಟ್ಟಿ ಬಂದಿ ದ್ದಳು. ಇಲ್ಲದಿದ್ದರೆ ಇಂಥ ಚೋದ್ಯವು ನಡೆ ಯುತ್ತಿತ್ತೇ ? ಇದಕ್ಕೇಕೆ ಚಿಂತಿಸುತ್ತೀರಿ ? ಅ ವಳು ತನ್ನ ಗಂಡನ ಮನೆಗೆ ತಾನು ಹೋ ದಳು.'' ಎಂದು ಆ ತಾಯಿ ತಂದೆಗಳಿಗೆ ಹೇಳಿ ಅವರನ್ನು ಸಮಾಧಾನಪಡಿಸಿದರು.

ಇತ್ತ ಅಕ್ಕನು, ಅಡವಿಗೆ ಹೋಗಿ ಅನ್ನಾಹಾರಗಳನ್ನು ಬಿಟ್ಟು ಶಿವನನ್ನು ಒಲಿಸುವದಕ್ಕಾಗಿ ತಪಸ್ಸು ಮಾಡಹತ್ತಿದಳು. ಶಿವನ ಚಿಂತೆಯಿಂದ ಎಷ್ಟೋ ದಿವಸಗಳು ಕಳೆದವು. ದೇಹವು ಬೆಂದು ಬೆಂಡಾಯಿತು. ತಲೆ ಕೂದಲುಗಳು ಬೆಳೆದು ಬೆಳೆದು ಜಡಿಗಟ್ಟಿ ಮೈಯೆಲ್ಲ ಮುಚ್ಚಿದವು. ಆ ಮೇಲೆ ಶಿವನು ಅಕ್ಕನ ಭಕ್ತಿಗೆ ಮೆಚ್ಚಲು ಜನರು ಸಂಸಾರದಲ್ಲಿ ಸಿಕ್ಕು ಕಷ್ಟಪಡುತ್ತಿರುವುದನ್ನು ತಪ್ಪಿಸುವುದಕ್ಕಾಗಿ ಅಕ್ಕನು ಊರು ಊರಿಗೆ ಉಪದೇಶ ಮಾಡುತ್ತಾ ಹೊರಟಳು.

ಆ ಕಾಲಕ್ಕೆ ಕಲ್ಯಾಣ ಪಟ್ಟಣದಲ್ಲಿ ಬಸವಾದಿ ಪ್ರಮಥರು ವೀರಶೈವ ಮತವನ್ನು ಪ್ರಸಾರ ಮಾಡುತ್ತಿದ್ದರು. ಅಕ್ಕನಿಗಾದರೂ ಇದೇ

ಬೇಕಾಗಿದ್ದಿತು. ಆದುದರಿಂದ ಅಕ್ಕನು ಕಲ್ಯಾ
ಣ ಪಟ್ಟಣಕ್ಕೆ ಬಂದಳು. ಅಲ್ಲಿ ಒಂದು ಕ
ಡೆ ಎಲ್ಲ ಶಿವಶರಣರು ಸೇರಿ ಜನರಿಗೆ ಉಪ
ದೇಶ ಮಾಡುವ ರೂಢಿ ಇದ್ದಿತು. ಅದಕ್ಕೆ
ಅನುಭವ ಮಂಟಪವೆಂದು ಹೇಳುತ್ತಿದ್ದರು.
ಅಲ್ಲಿಗೆ ಅಕ್ಕನು ಹೋಗಲು ಎಲ್ಲ ಶಿವಶರಣ
ರು ಬೆರಗಾದರು.

ಪ್ರಭುದೇವರು ಅವ್ವಾ, ನೀನಾರು? ಇ
ಲ್ಲಿಗೇಕೆ ಬಂದೆ ? ಇದೇನು ನಿನ್ನ ದೇಹ ?
ಹೀಗೇಕೆ ? ನಿನ್ನ ಗಂಡನಾರು ? ಎಂದು ಕೇ
ಳಿದರು. ಆಗ ಅಕ್ಕನು "ಅಣ್ಣಗಳಿರಾ? ಈ
ದೇಹವು ಕಂದಿದರೇನು ? ಮಿಂಚಿದರೇನು ?
ಮನಸ್ಸು ಜಳಜಳವಾಗಿದ್ದರೆ ಸಾಲದೇ ? ಶಿವ
ನೇ ನನ್ನ ಗಂಡನು. ನನ್ನನ್ನೇಕೆ ಕಾಡುತ್ತೀರಿ ?

ನಿಮಗೆ ನಾಚಿಕೆ ಬರಬಾರದೆಂದೇ ಈ ಕೂದ
ಲುಗಳನ್ನು ಮೈಯಿಗೆ ಮುಚ್ಚಿದ್ದೇನೆ. ಹಣ್ಣು
ಒಳಗೆ ಗಳಿಯದೆ ಹೊರಗಿನ ಸಿಪ್ಪೆಯು ಕಪ್ಪಾ
ಗುವುದೇ ?'' ಎಂದು ಹೇಳಲು ಎಲ್ಲ ಶಿವ
ಶರಣರು ಅಕ್ಕನನ್ನು ಬಹು ಮರ್ಯಾದೆಯಿಂ
ದ ಕಂಡು ಕೊಂಡಾಡಿ ಇವಳಿಂದ ಅನೇಕ
ಸಂಗತಿಗಳನ್ನು ತಿಳಿದು ಕೊಂಡರು.

ಈ ಪ್ರಕಾರ ಅಕ್ಕನು ವೀರಶೈವ ಮತ
ಪ್ರಸಾರಕ್ಕೆ ಅಲ್ಲಿ ಬಹು ಸಹಾಯ ಮಾಡಿ ಅ
ಲ್ಲಿಂದ ಹೊರಟು ಶ್ರೀಶೈಲಕ್ಕೆ ಹೋಗಿ ಅಲ್ಲಿ
ಬಯಲಾದಳು. ತಂಗಿ, ಅಕ್ಕನ ಉಪದೇಶ
ಗಳು ಅವಳ ವಚನಗಳಿಂದ ಗೊತ್ತಾಗುತ್ತವೆ.
ಅವಳ ವಚನದಲ್ಲಿ ಕೊನೆಗೆ ''ಚೆನ್ನಮಲ್ಲಿಕಾ
ರ್ಜುನ'' ಎಂದು ಹೇಳಿದೆ.

||ಓಂ||

# ಅಕ್ಕನ ಉಪದೇಶ.

(೧) ನೆಲದ ಮರೆಯ ನಿಧಾನದಂತೆ, ಫಲದ ಮರೆಯ ರುಚಿಯಂತೆ, ಶಿಲೆಯ ಮರೆಯ ಹೇಮದಂತೆ, ತಿಲದ ಮರೆಯ ತೈಲದಂತೆ, ಭಾವದ ಮರೆಯ ಬ್ರಹ್ಮವಾಗಿಪ್ಪ ಚೆನ್ನಮಲ್ಲಿಕಾರ್ಜುನನ ನಿಲವನಾರು ಅರಿಯಬಾರದು.

**ಅರ್ಥ**— ನೆಲದಲ್ಲಿ ಹೂಳಿಟ್ಟ ಹಣವು, ಹಣ್ಣಿನಲ್ಲಿರುವ ರುಚಿಯು, ಕಲ್ಲಿನಲ್ಲಿ ಕೂಡಿರುವ ಚಿನ್ನವು, ಎಳ್ಳಿನಲ್ಲಿರುವ ಎಣ್ಣೆಯು, ಹೇಗೆ ಕಣ್ಣಿಗೆ ಕಾಣುವುದಿಲ್ಲವೋ ಹಾಗೆಯೇ ದೇವರು ನಮ್ಮ ಕಣ್ಣಿಗೆ ಕಾಣದೆ ಅವರವರ ಭಾವನೆಯ ಮರೆಯಲ್ಲಿಯೇ ಇರುತ್ತಾನೆ.

(೨) ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೇ ಬೀಜ. ಎನಗುಳ್ಳದೊಂದು ಮನ. ಆ ಮನ ನಿಮ್ಮಲ್ಲಿ ಒಡವೆರೆದ ಬಳಿಕ ಎನಗೆ ಭವವುಂಟೆ ಚೆನ್ನಮಲ್ಲಿಕಾರ್ಜುನ ?

ಅರ್ಥ— ಲೋಕದ ಎಲ್ಲ ಗಿಡಬಳ್ಳಿಗಳ ಮತ್ತು ಪ್ರಾಣಿಗಳ ಬೆಳವಣಿಗೆ, ಕಾರ್ಯ, ಕಲಾಪಗಳಿಗೆ ಹೇಗೆ ಸೂರ್ಯನೇ ಮೂಲವಾಗಿದ್ದಾನೆಯೋ ಹಾಗೆಯೇ ನಮ್ಮ ಕೈ ಕಾಲು, ಬುದ್ಧಿ ಮೊದಲಾದವುಗಳ ಕಾರ್ಯಕಲಾಪಗಳಿಗೆ ನಮ್ಮ ಮನವೇ ಮೂಲ. ಆ ಮನಸ್ಸನ್ನು ಶಿವನೇ, ನಾನು ನಿನ್ನಲ್ಲಿ ಇಟ್ಟ ಮೇಲೆ ನನಗೆ ಹುಟ್ಟುಸಾವುಗಳುಂಟೆ? ಇಲ್ಲವೇ ಇಲ್ಲ.

**(೩) ವೇದ, ಶಾಸ್ತ್ರ, ಪುರಾಣಾಗಮಂಗಳೆಲ್ಲ ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿಭೋ! ಇವ ಕುಟ್ಟಲೇಕೆ? ಅತ್ತಲಿತ್ತ ಹರಿವ ಮನದ ಶಿರವನರಿದಡೆ ಬಚ್ಚಬರಿಯ ಬಯಲು ಚೆನ್ನಮಲ್ಲಿಕಾರ್ಜುನ.**

ಅರ್ಥ— ವೇದ, ಶಾಸ್ತ್ರ, ಆಗಮ, ಪುರಾಣ ಇವುಗಳನ್ನೆಲ್ಲಾ ಓದಿ, ಅರ್ಥಮಾಡಿ ವಾದಿಸುವುದು ಬತ್ತವನ್ನು ಕುಟ್ಟುವಂತೆಯೇ ಸರಿ. ಬತ್ತವನ್ನು ಕುಟ್ಟಿದರೆ ಹೇಗೆ ತೌಡು, ನುಚ್ಚು ಬರುವುದು ಸ್ವಾಭಾವಿಕವೋ ಹಾಗೆಯೇ ಈ ವೇದಾದಿ ಗ್ರಂಥಗಳನ್ನು ಓದಿದರೆ ಸಂಶಯ, ಭೇದಬುದ್ಧಿಗಳು ಹುಟ್ಟುವುದು ಸಹಜ. ಅದಕ್ಕಾಗಿ ಈ ವ್ಯರ್ಥವಾದ ಕೆಲಸವನ್ನು ಮಾಡದೆ ಮನಸ್ಸಿನ ತಲೆಯಂಥ ಆಶೆಯನ್ನು ಕಡಿದುಹಾಕಿದರೆ ತೀರಿತು. ಎಲ್ಲೆಲ್ಲಿಯೂ ಶಿವನೇ ತೋರುವನು,

(೪) ಸಂಗದಿಂದಲ್ಲದೆ ಅಗ್ನಿ ಹುಟ್ಟದು. ಸಂಗದಿಂದಲ್ಲದೆ ಬೀಜ ಮೊಳೆದೋರದು. ಸಂಗದಿಂದಲ್ಲದೆ ದೇಹವಾಗದು. ಸಂಗದಿಂದಲ್ಲದೆ ಸರ್ವ ಸುಖದೋರದು. ಚೆನ್ನಮಲ್ಲಿಕಾರ್ಜುನ ದೇವಯ್ಯ ನಿಮ್ಮ ಶರಣರ ಅನುಭಾವ ಸಂಗದಿಂದ ಆನು ಪರಮ ಸುಖಿಯಾದೆನು.

ಅರ್ಥ— ಕಲ್ಲು, ಕಟ್ಟಿಗೆ, ಮೊದಲಾದವುಗಳು ಒಂದ ಕ್ಕೊಂದು ಕೂಡಿದ ಹೊರತು ಬೆಂಕಿ ಹುಟ್ಟುವುದಿಲ್ಲ. ಬೀಜ ಮತ್ತು ಮಣ್ಣು ಕೂಡದೆ ಮೊಳಕೆಯಾಗುವುದಿಲ್ಲ. ಗಂಡಹೆಂಡಿರು ಕೂಡದೆ ದೇಹ ಹುಟ್ಟುವುದಿಲ್ಲ. ಇವುಗಳಂತೆಯೇ ಎಲ್ಲಾ ಸುಖಗಳೂ ಕೂಡುವಿಕೆಯಿಂದಲೇ ಉಂಟಾಗುತ್ತವೆ. ಆದ ಕಾರಣ ನಾನು ಶಿವಶರಣರ ಸದುಪದೇಶದಲ್ಲಿ ಕೂಡಿಕೊಂಡು ನಡೆದು ಹೆಚ್ಚಿನ ಸುಖದವಳಾದೆನು.

(೫) ಅರಿಯದವರೊಡನೆ ಸಂಗವ ಮಾಡಿದರೆ ಕಲ್ಲು ಹೊಯಿದು ಕಿಡಿಯ ತೆಗೆದುಕೊಂಬಂತೆ. ಬಲ್ಲವರೊಡನೆ ಸಂಗವ ಮಾಡಿದರೆ ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ. ಚೆನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಶರಣರ ಸಂಗ ಕರ್ಪೂರ ಗಿರಿಯ ಉರಿಕೊಂಡಂತೆ.

**ಅರ್ಥ**— ಬುದ್ಧಿಗೇಡಿಗಳಲ್ಲಿ ಕೂಡಿದ್ದರೆ ಕಲ್ಲಿಗೆ ಹೊಡೆದು ಬೆಂಕಿಯು ಕಿಡಿಯನ್ನು ಹೊಂದಿದಂತೆ ಕೇಡಾಗುವುದು. ಬುದ್ಧಿವಂತರಲ್ಲಿ ಕೂಡಿದ್ದರೆ ಮಸರು ಕಡೆದು ಬೆಣ್ಣೆಯನ್ನು ಹೊಂದುವಂತೆ ಒಳ್ಳೆಯದಾಗುವುದು. ಶಿವಶರಣರಲ್ಲಿ ಕೂಡಿದ್ದರೆ ಕರ್ಪೂರದ ಬೆಟ್ಟಕ್ಕೆ ಬೆಂಕಿಹತ್ತಿದರೂ ಹೇಗೆ ಏನೂ ಉಳಿಯುವುದಿಲ್ಲವೋ ಹಾಗೆಯೇ ಮುಂದೆ ಹುಟ್ಟು ಸಾವುಗಳೇ ಇರುವುದಿಲ್ಲ.

**(೬) ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯಾ? ಸಮುದ್ರದ ತಡೆಯಲ್ಲಿ ಮನೆಯ ಮಾಡಿ ನೊರೆತೆರೆಗಳಿಗಂಜಿದಡೆಂತಯ್ಯಾ? ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯಾ? ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯಾಲೋಕದೊಳಗೆ ಹುಟ್ಟಿದರ್ಬಳಿಕ ಸ್ತುತಿ ನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.**

**ಅರ್ಥ**— ಗುಡ್ಡದ ಮೇಲೆ ಇರುವುದಾದರೆ ಕ್ರೂರ ಮೃಗಗಳಿಗೆ ಅಂಜಬಾರದು. ಸಮುದ್ರದ ದಂಡೆಯಲ್ಲಿರುವುದಾದರೆ ನೆರೆತೆರೆಗಳಿಗೆ ಹೆದರಬಾರದು. ಸಂತೆ ಪೇಟೆಯಲ್ಲಿರುವುದಾದರೆ ಎಂತೆಂತಹ ಮಾತುಗಳಾದರೂ ಕೇಳೇ ಕೇಳುವವು. ಅವುಗಳಿಗೆ

ನಾಚಿದರೆ ಹೇಗೆ ? ಇವುಗಳಂತೆಯೇ ನಾವು ಲೋಕದಲ್ಲಿ ಹುಟ್ಟಿದ ಮೇಲೆ ಸ್ತುತಿಗಳೂ ನಿಂದೆಗಳೂ ಒಂದೇ ಬರುತ್ತವೆ. ಆದುದರಿಂದ ಅವುಗಳನ್ನು ಕೇಳಿ ಸಿಟ್ಟಾಗದೆ ಯಾವಾಗಲೂ ಸಮಾಧಾನದಿಂದ ಇರಬೇಕು.

**(೭) ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಯ ಕೊಂದು ನಲಿನಲಿದಾಡುವ. ತನ್ನ ಮನೆಯಲೊಂದು ಶಿಶು ಸತ್ತಡೆ ಅದಕ್ಕೆ ಮರಗುವಂತೆ ಅವಕೇಕೆ ಮರುಗನು? ಜಾಲಗಾರನ ದುಃಖ ಜಗಕೆಲ್ಲ ನಗೆಗೆಡೆ. ಇದು ಕಾರಣ ಚೆನ್ನಮಲ್ಲಿಕಾರ್ಜುನಯ್ಯನ ಭಕ್ತರಾಗಿರ್ದು ಜೀವ ಹಿಂಸೆಯಮಾಡುವ ಮಾದಿಗರನೇನೆಂಬೆನಯ್ಯ ?**

**ಅರ್ಥ—** ಜಾಲಗಾರರು ನೀರಿನಲ್ಲಿ ಮೀನಗಳನ್ನು ಹಿಡಿದು ಕೊಲ್ಲುವಾಗ ನಗುತ್ತಾರೆ. ಆದರೆ ತಮ್ಮ ಮನೆಯಲ್ಲಿ ಒಂದು ಮಗು ಸತ್ತರೆ ಅಳುತ್ತಾರೆ. ಮೀನಗಳು ಸಾಯುವಾಗ ಅದೇಕೆ ಅವರು ಅಳಬಾರದು ? ಶಿವಭಕ್ತರಾಗಿ ಪ್ರಾಣಿಗಳನ್ನು ಕೊಂದರೆ ಅವರು ಮಾದಿಗರೆಂದೇ ತಿಳಿಯಬೇಕು.

**(೮) ಹಸಿವಾದೊಡೆ ಭಿಕ್ಷಾನ್ನಂಗಳುಂಟು. ತೃಷೆಯಾದೊಡೆ ಕೆರೆ, ಹಳ್ಳ, ಬಾವಿಗಳುಂಟು. ಶಯನಕ್ಕೆ ಹಾಳು**

ದೇಗುಲಗಳುಂಟು. ಚೆನ್ನಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನೆನಗುಂಟು.

ಅರ್ಥ— ಹಸಿವೆಯಾದರೆ ಮೂರು ಮನೆಗಳಲ್ಲಿ ಬೇಡಿ ಊಟಮಾಡುವೆನು. ನೀರಡಿಕೆಯಾದರೆ ಕೆರೆ ಹಳ್ಳ ಬಾವಿಗಳು ಇದ್ದೇ ಇವೆ. ಮಲಗುವದಕ್ಕಾದರೋ ಗುಡಿಗಳು ಉಂಟೇ ಉಂಟು. ಶಿವನೇ, ನಾನು ಎಲ್ಲಿದ್ದರೂ ನೀನು ನನಗೆ ಹೇಗಾದರೂ ಜತೆಗಾರನಾಗಿಯೇ ಇರುವಿ. ಎಂದಮೇಲೆ ನನಗೆ ಯಾವ ಚಿಂತೆಯೂ ಇಲ್ಲ.

(೯) ಆರೂ ಇಲ್ಲದವಳೆಂದು ಆಳಿಗೊಳಲು ಬೇಡ ಕಂಡಯ್ಯ. ಏನು ಮಾಡಿದರೆಯೂ ನಾನಂಜುವಳಲ್ಲ. ತರಗೆಲೆಯ ಮೆಲ್ಲಿದ್ದು ನಾನಿಹೆನು. ಸುರಿಗೆಯ ಮೇಲೊರಗಿ ನಾನಿಹೆನು. ಚೆನ್ನಮಲ್ಲಿಕಾರ್ಜುನಯ್ಯ ಕರ ಕೆಡೆ ನೋಡಿದಡೆ ಒಡಲನು ಪ್ರಾಣವನು ನಿಮಗೊಪ್ಪಿಸಿ ಶುದ್ಧಳಹೆನು.

ಅರ್ಥ— ಶಿವನೇ, ನನಗೆ ಯಾರೂ ಇಲ್ಲವೆಂದು ನೀನು ತೊಂದರೆ ಕೊಡಬೇಡ. ನೀನು ಎಷ್ಟು ತೊಂದರೆ ಕೊಟ್ಟರೂ ನಾನು ಹೆದರುವಳಲ್ಲ. ಒಣಗಿದ ಎಲೆಗಳನ್ನು ತಿಂದಾದರೂ ಜೀವಿಸುವೆನು. ಕತ್ತಿಯ ತುದಿಯ ಮೇಲಾದರೂ ಮಲಗುವೆನು. ಶಿವನೇ,

ನೀನು ಸಿಟ್ಟಿನಿಂದ ನನ್ನ ನೋಡಿದರೆ ಕಡೆಗೆ ನಾನು ನನ್ನ ದೇಹ ವನ್ನೂ, ಪ್ರಾಣವನ್ನೂ ನಿನಗೆ ಒಪ್ಪಿಸಿ ಪರಿಶುದ್ಧಳಾಗುವೆನು.

**(೧೦) ಕಿಡಿ ಕಿಡಿ ಕೆದರಿದಡೆ ಎನಗೆ ಹಸಿವು ತೃಷೆ ಅಡಗಿತೆಂಬೆನು. ಮುಗಿಲು ಹರಿದು ಬಿದ್ದರೆ ಎನಗೆ ಮಜ್ಜ ನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದರೆ ಎನಗೆ ಪುಷ್ಪವೆಂ ಬೆನು. ಚೆನ್ನಮಲ್ಲಿಕಾರ್ಜುನಯ್ಯ ಶಿರ ಹರಿದು ಬಿದ್ದರೆ ಪ್ರಾಣ ನಿಮಗರ್ಪಿತವೆಂಬೆನು.**

**ಅರ್ಥ**— ಶಿವನೇ, ನೀನು ನನ್ನ ಮೇಲೆ ಬೆಂಕಿಯಾದರೆ ನನಗೆ ಹಸಿವು ನೀರಡಿಕೆಗಳೇ ಇಂಗಿಹೋಗುವವು. ನನ್ನ ಮೇಲೆ ಮುಗಿಲು ಹರಿದು ಬಿದ್ದರೆ ನನಗೆ ಜಳಕ ಮಾಡಿಸಿದಿರೆಂದು ತಿಳಿಯುವೆನು. ಗುಡ್ಡವೇ ನನ್ನ ಮೇಲೆ ಬಿದ್ದರೆ ನೀವು ಹೂವಕೊಟ್ಟರೆಂದು ಭಾವಿಸು ವೆನು. ನನ್ನ ತಲೆಯೇ ಕತ್ತರಿಸಿ ನೆಲಕ್ಕೆ ಬಿದ್ದರೆ ನನ್ನ ಪ್ರಾಣ ನಿಮ್ಮ ಪಾದಕ್ಕೆ ಅರ್ಪಿತವಾಯಿತೆಂದು ಹೇಳುವೆನು.

**(೧೧) ಚಂದನವ ಕಡಿದು ಕೊರೆದು ತೇದೊಡೆ ನೊಂದೆ ನೆಂದು ಕಂಪ ಬಿಟ್ಟಿತ್ತೆ ? ತಂದು ಸುವರ್ಣವ ಕಡಿದೊರೆ ದೊಡೆ ಬೆಂದು ಕಳಂಕ ಹಿಡಿದಿತ್ತೆ ? ಸಂದು ಸಂದು ಕಡಿದ ಕಬ್ಬನು ಗಾಣದಲಿಕ್ಕಿ ಬೆಂದು ಪಾಕಾಗುಳ್ಳ ಸಕ್ಕರೆಯಾಗಿ**

**ನೊಂದೆನೆಂದು ಸವಿಯು ಬಿಟ್ಟಿತ್ತೆ? ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ಎನಗೆ ಹಾನಿಯೆ? ಎನ್ನ ತಂದೆ ಚೆನ್ನಮಲ್ಲಿಕಾರ್ಜುನ ದೇವಯ್ಯ ಕೊಂದಡೆ ಶರಣೆಂಬುದಮಾಣೆ.**

**ಅರ್ಥ—** ಚಂದನದ ಕಟ್ಟಿಗೆಯನ್ನು ಎಷ್ಟು ಕೊರೆದು ತೇದರೂ ಅದು ತನ್ನ ವಾಸನೆಯನ್ನು ಬಿಡುವುದಿಲ್ಲ. ಚಿನ್ನವನ್ನು ಎಷ್ಟು ಕಡಿದು ಪುಟಕೊಟ್ಟರೂ ಅದು ಕಪ್ಪಾಗುವುದಿಲ್ಲ. ಕಬ್ಬನ್ನು ಎಷ್ಟು ತುಂಡುಮಾಡಿ ಗಾಣದಲ್ಲಿ ಹಾಕಿ ತಿರುವಿ ರಸವನ್ನು ಕುದಿಸಿದರೂ ಅದು ಸಿಹಿಯಾಗದೆ ಬಿಡುವುದಿಲ್ಲ. ಇವುಗಳಂತೆಯೇ ಶಿವನೇ ನೀನು ನನಗೆ ಎಷ್ಟು ತೊಂದರೆಗಳನ್ನು ಕೊಟ್ಟರೂ ನನ್ನಲ್ಲಿರುವ ದೋಷಗಳೆಲ್ಲಾ ಹೋಗುವುದರಿಂದ ನನಗೆ ಹಾನಿಯಿಲ್ಲ. ಲಾಭವೇ ಉಂಟು. ನೀನು ನನ್ನನ್ನು ಕೊಂದರೂ ನಿನಗೆ ನಾನು ಶರಣೆಂಬುದನ್ನು ಮಾತ್ರ ಬಿಡುವವಳಲ್ಲ.

**(೧೨) ಕಾಯ ಕರ್ರನೆ ಕಂದಿದರೇನು? ಕಾಯ ಮಿರ್ರನೆ ಮಿಂಚಿದರೇನು? ಅಂತರಂಗ ಶುದ್ಧವಾದ ಬಳಿಕ ಚೆನ್ನಮಲ್ಲಿಕಾರ್ಜುನನೊಲಿದ ಕಾಯ ಎಂತಾದೊಡೆಮಗೇನಯ್ಯ?**

ಅರ್ಥ— ಈ ದೇಹವು ಕಂದಿ ಕಪ್ಪಾದರೇನು? ಬಲಿದು ಮಿರಿ ಮಿರಿ ಮಿಂಚಿದರೇನು? ಮನಸ್ಸು ಜಳಜಳವಾಗಿದ್ದರೆ ಸಾಕು. ಅವರಿಗೆ ಶಿವನು ಮೆಚ್ಚುತ್ತಾನೆ. ಅಂಥವರ ದೇಹ ಹೇಗಿದ್ದರೇನು?

**(೧೩) ಗುರುವೇ ತೆತ್ತಿಗನಾದ. ಲಿಂಗವೇ ಮದುವಣಿಗನಾದ. ಆನು ಮದುವಳಿಗೆಯಾದೆನು. ವಸುಧೆಯು ಭಕ್ತರೆಲ್ಲರು ನಿಬ್ಬಣಿಗರಾದರು. ಕೊಟ್ಟರು ಸಾದೃಶ್ಯವಪ್ಪ ಗಂಡನ ನೋಡಿ. ಇದುಕಾರಣ ಚೆನ್ನಮಲ್ಲಿಕಾರ್ಜುನಯ್ಯನೇ ಗಂಡ ನೆನಗೆ.**

**ಅರ್ಥ**— ಗುರುಗಳೇ ನನ್ನ ತಾಯಿತಂದೆಗಳು. ಲಿಂಗದೇವನೇ ಮದಮಗನು. ನಾನೇ ಮದಮಗಳು. ಲೋಕದಲ್ಲಿರುವ ಶಿವಭಕ್ತರೆಲ್ಲಾ ನಿಬ್ಬಣದವರು. ಒಳ್ಳೇ ವರನನ್ನೇ ನೋಡಿ ಆತಗೆ ನನ್ನ ಕೊಟ್ಟು ಲಗ್ನ ಮಾಡಿದರು. ಆದುದರಿಂದ ಶಿವಲಿಂಗನೇ ನನ್ನ ಗಂಡನು.

**(೧೪) ಸಾವಿಲ್ಲದ, ಕೇಡಿಲ್ಲದ ರೂಹಿಲ್ಲದ, ಚಲುವಂಗಾನೊಲಿದೆನವ್ವ. ಎಡೆ ಇಲ್ಲದ ಕಡೆ ಇಲ್ಲದ ತೆರಹಿಲ್ಲದ ಕುರುಹಿಲ್ಲದ ಚಲುವಂಗಾನೊಲಿದೆ ಎಲೆ ಅವ್ವಾ. ನೀನು ಕೇಳಾ ತಾಯಿ. ಭವವಿಲ್ಲದ ಭಯವಿಲ್ಲದ ನಿರ್ಭಯ**

ಚಲುವಂಗೊಲಿದೆ ನಾನು. ಕುಲ ಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ. ಇದುಕಾರಣ ಚೆನ್ನಮಲ್ಲಿಕಾರ್ಜುನ ಚಲುವ ಗಂಡನೆನಗೆ. ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು.

ಅರ್ಥ— ಅವ್ವಾ, ಎಲ್ಲರೂ ಸತ್ತು ಹುಟ್ಟುವಂಥವರನ್ನೇ ಗಂಡನನ್ನು ಮಾಡಿಕೊಳ್ಳುತ್ತಾರೆ. ನಾನು ಅವುಗಳನ್ನು ಮೀರಿದ ಲಿಂಗದೇವನನ್ನು ಮಾಡಿಕೊಂಡೆನು.

(೧೫) ಬಸವಣ್ಣ, ನಿಮ್ಮಂಗದಾಚಾರವ ಕಂಡು ಎನಗೆ ಲಿಂಗಸಂಗವಾಯಿತ್ತು. ಅಯ್ಯ ಬಸವಣ್ಣ, ನಿಮ್ಮ ಮನದ ಸುಜ್ಞಾನವ ಕಂಡು ಎನಗೆ ಜಂಗಮಸಂಬಂಧವಾಯಿತ್ತಯ್ಯ ಬಸವಣ್ಣ. ನಿಮ್ಮ ಸದ್ಭಕ್ತಿಯ ತಿಳಿದು ಎನಗೆ ನಿಜವು ಸಾಧ್ಯ ವಾಯಿತ್ತು. ಚೆನ್ನಮಲ್ಲಿಕಾರ್ಜುನಯ್ಯನ ಹೆಸರಿಟ್ಟು ಗುರು ನೀವಾದಕಾರಣ ನಿಮ್ಮ ಶ್ರೀಪಾದಕ್ಕೆ ನಮೋನಮೋ ಎನು ತಿರ್ದೆನು.

ಅರ್ಥ— ಬಸವಣ್ಣನವರೇ ನನ್ನ ಗುರುಗಳು. ಅವರ ಪಾದಕ್ಕೆ ಅನೇಕ ವಂದನೆಗಳು.

(೧೬) ಎನ್ನಂತೆ ಪುಣ್ಯಗೈದವರುಂಟೆ? ಎನ್ನಂತೆ ಭಾಗ್ಯ ಗೈದವರುಂಟೆ? ಕಿನ್ನರನಂತಪ್ಪ ಸಹೋದರರೆನಗೆ. ಏಳೇಳು

**ಜನ್ಮದಲಿ ಶಿವಭಕ್ತರೇ ಬಂಧುಗಳೆನಗೆ. ಚೆನ್ನಮಲ್ಲಿಕಾರ್ಜುನ ನಂತಪ್ಪ ಗಂಡ ನೋಡಾ ಎನಗೆ.**

**ಅರ್ಥ**— ಲಿಂಗದೇವನೇ ನನ್ನ ಗಂಡ. ಕಿನ್ನರಿ ಬಮ್ಮಯ್ಯ ನನ್ನ ಅಣ್ಣ. ಶಿವಭಕ್ತರೆಲ್ಲಾ ನನ್ನ ಒಡಹುಟ್ಟಿದವರು. ಎಂದ ಮೇಲೆ ನನ್ನಂಥ ಪುಣ್ಯವಂತರು ಯಾರೂ ಇಲ್ಲ

**(೧೭) ಹಾಲಹಿಡಿದು ಬೆಣ್ಣೆಯನರಸಲುಂಟೆ? ಲಿಂಗವ ಹಿಡಿದು ಪುಣ್ಯತೀರ್ಥಕ್ಕೆ ಹೋಗಲುಂಟೆ? ಲಿಂಗದ ಪಾದ ತೀರ್ಥ ಪ್ರಸಾದವಕೊಂಡು ಅನ್ಯಬೋಧೆ ಅನ್ಯಶಾಸ್ತ್ರಕ್ಕೆ ಹಾರೈಸಲೇತಕ್ಕೆ? ಇಷ್ಟಲಿಂಗವಿದ್ದಂತೆ ಸ್ಥಾವರಲಿಂಗಕ್ಕೆ ಶರಣೆಂದೊಡೆ, ತಡೆಯದೆ ಹುಟ್ಟಿಸುವ ಶ್ವಾನನ ಗರ್ಭದಲ್ಲಿ. ಇದನರಿದು, ಗುರು ಕೊಟ್ಟ ಲಿಂಗದಲ್ಲಿಯೇ ಎಲ್ಲ ತೀರ್ಥಂಗಳು, ಎಲ್ಲ ಕ್ಷೇತ್ರಂಗಳು ಇಹವೆಂದು ಭಾವಿಸಿ ಮುಕ್ತರಪ್ಪುದಯ್ಯ! ಇಂತಲ್ಲದೆ ಗುರುಕೊಟ್ಟ ಲಿಂಗವ ಕಿರಿದುಮಾಡಿ, ತೀರ್ಥಲಿಂಗವ ಹಿರಿದು ಮಾಡಿ ಹೋದಾತಂಗೆ ಅಘೋರ ನರಕ ತಪ್ಪದು ಕಾಣಾ ಚೆನ್ನಮಲ್ಲಿಕಾರ್ಜುನಾ.**

**ಅರ್ಥ**— ಲಿಂಗವನ್ನು ಧರಿಸಿದವರು ಆ ಲಿಂಗ ಪೂಜೆಯನ್ನು ಮಾತ್ರ ಮಾಡಬೇಕೇ ವಿನಾ ಇನ್ನಾವ ದೇವರಿಗೂ ನಡೆದುಕೊಳ್ಳಬಾರದು. ತೀರ್ಥ ಯಾತ್ರೆಯ ಮಾಡಬಾರದು.

(೧೮) ಹಗಲು ನಾಲ್ಕು ಜಾವ ನಿಮ್ಮ ಕಳವಳದಲ್ಲಿಪ್ಪೆ, ನೋಡಯ್ಯ; ಇರುಳು ನಾಲ್ಕು ಜಾವ ನಿಮ್ಮ ವಿಕಳಾವಸ್ಥೆ ಯಲ್ಲಿರ್ಪೆ, ನೋಡಯ್ಯ; ಇರುಳು ಹಗಲು ನಿಮ್ಮ ಕಳವಳ ದಲ್ಲಿ ಮರೆದೊರಗಿದೆನಯ್ಯಾ. ಚೆನ್ನಮಲ್ಲಿಕಾರ್ಜುನಾ, ನಿಮ್ಮೊ ಲುಮೆ ನಟ್ಟು ಹಸಿವು ತೃಷೆ ನಿದ್ರೆಯ ಮರೆತೆನು.

ಅರ್ಥ— ಶಿವನೇ, ಹಗಲೂ ಇರುಳೂ ನನಗೆ ನಿಮ್ಮ ಚಿಂತೆಯೇ ಚಿಂತೆ. ನನಗೆ ಹಸಿವು ನೀರಡಿಕೆಗಳು ಕೂಡಾ ಇಲ್ಲ. ಯಾವಾಗಲೂ ನಿಮ್ಮ ನೆನವೇ ನೆನವು.

(೧೯) ಬಂಜೆ ಬೇನೆಯನರಿಯಳು. ಬಲದಾಯಿ ಮುದ್ದ ಬಲ್ಲಳೆ? ನೊಂದನೋವ ನೋಯದವರೆತ್ತಬಲ್ಲರು? ಚೆನ್ನ ಮಲ್ಲಿಕಾರ್ಜುನ, ನೀನಿರಿದಲಗು ಒಡಲಲ್ಲಿ ಮುರಿದು ಹೊರ ಳುವಳ ನೀವೆತ್ತ ಬಲ್ಲಿರೆ ಎಲೆ ತಾಯಿಗಳಿರಾ?

ಅರ್ಥ— ಅವ್ವಾ! ಬಂಜೆಗೆ ಮಕ್ಕಳ ಹೆರುವಾಗ ಆಗುವ ಬೇನೆ ಗೊತ್ತೆ? ಮಲತಾಯಿ ಮಗುವಿಗೆ ಹೇಗೆ ಮುದ್ದುಕೊ ಡುವಳು? ಲಿಂಗದೇವನ ಕಾಣದೆ ನನಗಾಗುತ್ತಿರುವ ನೋವನ್ನು ನೀವೇನು ಬಲ್ಲಿರಿ?

(೨೦) ಅಕ್ಕ ಕೇಳವ್ವ. ಅಕ್ಕಯ್ಯ ನಾನೊಂದ ಕನಸು ಕಂಡೆ. ಅಕ್ಕಿಯಡಕೆ ತೆಂಗಿನ ಕಾಯ ಕಂಡೆ. ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲಗೊರವನು ಭಿಕ್ಷಕ್ಕೆ ಬಂದುದ ಕಂಡೆನವ್ವ. ಮಿಕ್ಕುಮೀರಿ ಹೋಹನ ಬೆಂಬತ್ತಿ ಕೈವಿಡಿದೆನು. ಚೆನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು.

ಅರ್ಥ— ಅಕ್ಕಾ ! ಕೇಳವ್ವಾ. ನಾನು ಒಂದು ಕನಸನ್ನು ಕಂಡೆನು. ಅಕ್ಕಿ, ಅಡಕೆ, ತೆಂಗಿನಕಾಯಿ, ಇದ್ದವು. ಚಿಕ್ಕ ಜಡಿಯಿದ್ದ ಒಬ್ಬ ಬೇಡನನ್ನು ಕಂಡೆ. (ಎಂದರೆ ಶಿವನನ್ನು) ಅವನ ಬೆನ್ನು ಹತ್ತಿ ಹೋದೆ. ಅವನ ಕೈ ಹಿಡಿದೆ. ನೋಡಿ ಕಣ್ಣು ತೆರೆದೆ.

(೨೧) ಲಿಂಗವೆನ್ನೆ, ಲಿಂಗೈಕ್ಯವೆನ್ನೆ. ಸಂಗವೆನ್ನೆ, ಸಮರಸವೆನ್ನೆ. ಆಯಿತ್ತೆನ್ನೆ, ಆಗದೆನ್ನೆ. ನೀನೆನ್ನೆ, ನಾನೆನ್ನೆ. ಚೆನ್ನಮಲ್ಲಿಕಾರ್ಜುನನಲ್ಲಿ ಲಿಂಗೈಕ್ಯವಾದ ಬಳಿಕ ಏನೂ ಎನ್ನೆ.

ಅರ್ಥ— ಲಿಂಗದೇವನಲ್ಲಿ ಕೂಡುವ ವರೆಗೆ ನಾನು ನೀನು ಎಂಬ ತಿಳುವಳಿಕೆ. ಆತನಲ್ಲಿ ಬೆರೆತ ಮೇಲೆ ನಾನೂ ಇಲ್ಲ. ನೀನೂ ಇಲ್ಲ. ಏನೂ ಇಲ್ಲ.

# ಕೇಳಿರಿ!



ಪ್ರತಿ ವರುಷ ಚೈತ್ರ ಶುದ್ಧ ಹುಣ್ಣಿಮೆ ದಿನ ಅಕ್ಕನ ಹುಣ್ಣಿಮೆಯೆಂದು ಕನ್ನಡನಾಡಿನ ಅಕ್ಕತಂಗಿಯರೆಲ್ಲಾ ಹಬ್ಬದಂತೆ ಆಚರಿಸಬೇಕು.

ಆ ದಿನ ಅಕ್ಕನ ಚಿತ್ರದ ಮೆರವಣಿಗೆ ಮಾಡಬೇಕು. ಹೆಣ್ಣುಮಕ್ಕಳು ಸಭೆಸೇರಿ ಅಕ್ಕನ ಸಂಬಂಧವಾಗಿ ಉಪನ್ಯಾಸ ಮಾಡಬೇಕು.

ಹೆಣ್ಣುಮಕ್ಕಳು ಮಾಡಿದ ನೂಲು, ಕಸೂತಿ ಮೊದಲಾದ ಕೈಗಾರಿಕೆಯ ವಸ್ತುಗಳ ಪುಟ್ಟ ಪ್ರದರ್ಶನವನ್ನೂ ಕೂಡಿಸಬೇಕು.

ಈ ಪುಸ್ತಕವು
**ಆಲಮಟ್ಟಿ ಬಸವಲಿಂಗ ಮುದ್ರಣ ಮಂದಿರದಲ್ಲಿ**
ಶ್ರೀ. ಹರ್ಡೆಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು
ಇವರಿಂದ
**ವೀರಶೈವ ವಿದ್ಯಾಲಯದಲ್ಲಿ**
ಪ್ರಕಟಿಸಲ್ಪಟ್ಟಿತು.